# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಸದಸ್ಯರ ಹೆಸರು | : | ಶ್ರೀ ಕೆ.ಎ.ತಿಪ್ಪೇಸ್ವಾಮಿ (ನಾಮ ನಿರ್ದೇಶನ ಹೊಂದಿದವರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1363 |
| ಉತ್ತರಿಸುವ ಸಚಿವರು | : | ಕಂದಾಯ ಸಚಿವರು |
| ಉತ್ತರಿಸಬೇಕಾದ ದಿನಾಂಕ | : | 09.03.2022. |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕಂದಾಯ ಇಲಾಖೆ ಅಡಿಯಲ್ಲಿ ಬರುವ ವಿವಿಧ ಪ್ರಾಧಿಕಾರಗಳು ಯಾವುವು; ಈ ಎಲ್ಲಾ ಪ್ರಾಧಿಕಾರಗಳಿಗೆ ಅಧಿಕಾರೇತರರನ್ನು ಒಳಗೊಂಡ ಕಾರ್ಯಕಾರಣಿಗಳನ್ನು ರಚಿಸಲಾಗಿದೆಯೇ; (ಹಾಗಿದ್ದಲ್ಲಿ ಪ್ರಾಧಿಕಾರವಾರು ಮಾಹಿತಿ ನೀಡುವುದು) | 1) ಬನವಾಸಿ ಅಭಿವೃದ್ಧಿ ಪ್ರಾಧಿಕಾರ,<br>2) ಕಿತ್ತೂರು ಅಭಿವೃದ್ಧಿ ಪ್ರಾಧಿಕಾರ,<br>3) ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರ,<br>4) ಸರ್ವಜ್ಞ ಅಭಿವೃದ್ಧಿ ಪ್ರಾಧಿಕಾರ.<br>5) ಶ್ರೀ ಮಲೈ ಮಹದೇಶ್ವರಸ್ವಾಮಿ ಕ್ಷೇತ್ರ ಅಭಿವೃದ್ಧಿ ಪ್ರಾಧಿಕಾರ<br><br>ಮೇಲ್ಕಂಡ ಪ್ರಾಧಿಕಾರಗಳಿಗೆ ಅಧಿಕಾರೇತರರನ್ನು ಒಳಗೊಂಡ ಕಾರ್ಯಕಾರಣಿಗಳನ್ನು ರಚಿಸಲಾಗಿದ್ದು, ಕಾಯ್ದೆಯ ಪ್ರತಿಯನ್ನು ಅನುಬಂಧದಲ್ಲಿ ಒದಗಿಸಿದೆ. |
| ಆ) | ರಾಜ್ಯದಲ್ಲಿನ ಈ ಪ್ರಾಧಿಕಾರಗಳಲ್ಲಿ ಕಳೆದ 3 ವರ್ಷಗಳಲ್ಲಿ ಸರ್ಕಾರದಿಂದ ನೀಡಿರುವ ಆರ್ಥಿಕ ಅನುದಾನ ಮತ್ತು ಇತರೆ ಸವಲತ್ತುಗಳು ಯಾವುವು; ಈ ಸೌಲಭ್ಯಗಳನ್ನು ಈ ಪ್ರಾಧಿಕಾರಗಳು ಯಾವ ರೀತಿ ಸದುಪಯೋಗಡಿಸಿಕೊಂಡಿವೆ; (ಪೂರ್ಣ ಮಾಹಿತಿ ನೀಡುವುದು) | (see table below) |

| ಕ್ರ.ಸಂ | ಮಂಡಳಿ/ಪ್ರಾಧಿಕಾರಗಳು | ವರ್ಷಾವಾರು | ಬಿಡುಗಡೆ ಮಾಡಲಾದ ಅನುದಾನ(ರೂ.ಲಕ್ಷಗಳಲ್ಲಿ) |
|---|---|---|---|
| 1 | ಬನವಾಸಿ ಅಭಿವೃದ್ಧಿ ಪ್ರಾಧಿಕಾರ. | 2018-19<br>2019-20<br>2020-21 | 50.00.<br>100.00.<br>134.44. |
| 2 | ಕಿತ್ತೂರು ಅಭಿವೃದ್ಧಿ ಪ್ರಾಧಿಕಾರ. | 2018-19<br>2019-20<br>2020-21 | --- |
| 3 | ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರ. | 2018-19<br>2019-20<br>2020-21 | 500.00<br>600.00<br>--- |
| 4 | ಸರ್ವಜ್ಞ ಅಭಿವೃದ್ಧಿ ಪ್ರಾಧಿಕಾರ. | 2018-19<br>2019-20<br>2020-21 | ---<br>20.00<br>25.00 |
| 5 | ಶ್ರೀ ಮಲೈ ಮಹದೇಶ್ವರಸ್ವಾಮಿ ಕ್ಷೇತ್ರ ಅಭಿವೃದ್ಧಿ ಪ್ರಾಧಿಕಾರ. | 2018-19<br>2019-20<br>2020-21 | --- |
| | | | |

| | | |
|---|---|---|
| ಇ) | ರಾಜ್ಯದಲ್ಲಿರುವ ಈ ಪ್ರಾಧಿಕಾರಗಳಿಗೆ ಅಧಿಕಾರೇತರ ಮತ್ತು ಅಧಿಕಾರಿ ಮುಖ್ಯಸ್ಥರನ್ನು ನೇಮಿಸದೆ, ಈ ಪ್ರಾಧಿಕಾರಗಳು ನಮೂದಿಸಿದ ಉದ್ದೇಶಗಳನ್ನು ಮತ್ತು ಧ್ಯೇಯಗಳನ್ನು ಸಾಧಿಸಲು ವಿಫಲರಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದಲ್ಲಿ, ಇದನ್ನು ಸರಿಪಡಿಸುವ ಕುರಿತು ಕೈಗೊಂಡ ಕ್ರಮಗಳೇನು (ವಿವರ ನೀಡುವುದು) | ಅನ್ವಯಿಸುವುದಿಲ್ಲ. |

ಸಂಖ್ಯೆ: ಕಂಇ 53 ಆರ್‌ಇಹೆಚ್ 2022

(ಆರ್.ಅಶೋಕ)
ಕಂದಾಯ ಸಚಿವರು.

(ಸಿ) "ಬನವಾಸಿ" ಎಂದರೆ, ಬನವಾಸಿ ಗ್ರಾಮ ಪಂಚಾಯಿತಿಯ ಮಿತಿಗಳು ಮತ್ತು ಬನವಾಸಿ ಗ್ರಾಮ ಪಂಚಾಯಿತಿಯಿಂದ ಇಪ್ಪತ್ತು ಕಿಲೋಮೀಟರ್‌ಗಳ ವ್ಯಾಪ್ತಿಯೊಳಗಿನ ಪ್ರದೇಶ ಮತ್ತು ಬನವಾಸಿ ಪಾರಂಪರಿಕ ತಾಣಗಳ ಅಭಿವೃದ್ಧಿಗಾಗಿ ರಾಜ್ಯ ಸರ್ಕಾರವು ಕಾಲಕಾಲಕ್ಕೆ ಅರ್ಜಿಸಿದ ಭೂಮಿಗಳು ಹಾಗೂ ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಘೋಷಿಸಲಾದ ಅಂಥ ಇತರ ಪ್ರದೇಶ ಮತ್ತು ಇವುಗಳೆಲ್ಲವನ್ನು ಒಳಗೊಳ್ಳುತ್ತದೆ.

(ಡಿ) "ಅಧ್ಯಕ್ಷ" ಎಂದರೆ, ಪ್ರಾಧಿಕಾರದ ಅಧ್ಯಕ್ಷ;

(ಇ) "ಆಯುಕ್ತ" ಎಂದರೆ, 10ನೇ ಪ್ರಕರಣದ ಅಡಿಯಲ್ಲಿ ನೇಮಕ ಮಾಡಿದ ಪ್ರಾಧಿಕಾರದ ಆಯುಕ್ತ; (ಎಫ್) "ನಿಧಿ" ಎಂದರೆ, ಪ್ರಾಧಿಕಾರದ ನಿಧಿ;

(ಜಿ) "ಪಾರಂಪರಿಕ ತಾಣ" ಎಂದರೆ, ಪ್ರಾಚೀನ ಸ್ಮಾರಕಗಳು ಮತ್ತು ಪುರಾತತ್ವ ಸ್ಥಳಗಳು ಹಾಗೂ ಅವಶೇಷಗಳ ಅಧಿನಿಯಮ, 1958ರ (1958ರ ಕೇಂದ್ರ ಅಧಿನಿಯಮ ಸಂಖ್ಯೆ 24) ಅಡಿಯಲ್ಲಿ ಸಂರಕ್ಷಿತ ಪ್ರದೇಶವೆಂದು ಉಲ್ಲೇಖಿಸಲಾದ ಪ್ರದೇಶವನ್ನು ಹೊರತುಪಡಿಸಿದ ಆದರೆ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ತಾಣಗಳನ್ನು ಒಳಗೊಳ್ಳುವ ಸಂಪೂರ್ಣ ಪ್ರದೇಶವಾಗಿದೆ.

(ಹೆಚ್) "ಸದಸ್ಯ" ಎಂದರೆ, ಪ್ರಾಧಿಕಾರದ ಸದಸ್ಯ;

(ಐ) "ವಿನಿಯಮಗಳು" ಎಂದರೆ, 44ನೇ ಪ್ರಕರಣದ ಅಡಿಯಲ್ಲಿ ರಚಿಸಿದ ಪ್ರಾಧಿಕಾರದ ವಿನಿಯಮಗಳು;

(ಜೆ) "ಅನುಸೂಚಿ" ಎಂದರೆ, ಈ ಅಧಿನಿಯಮಕ್ಕೆ ಲಗತ್ತಿಸಿದ ಅನುಸೂಚಿ; ಮತ್ತು

(ಕೆ) "ಉಪಾಧ್ಯಕ್ಷ" ಎಂದರೆ, ಪ್ರಾಧಿಕಾರದ ಉಪಾಧ್ಯಕ್ಷ.

## ಅಧ್ಯಾಯ – II

## ಪ್ರಾಧಿಕಾರ ಮತ್ತು ಅದರ ಉದ್ಯೋಗಿಗಳು

**3. ಪ್ರಾಧಿಕಾರದ ರಚನೆ.-** (1) ಈ ಅಧಿನಿಯಮದ ಪ್ರಾರಂಭದ ತರುವಾಯ, ಆದಷ್ಟು ಬೇಗನೆ, ಈ ಅಧಿನಿಯಮದ ಉದ್ದೇಶಗಳಿಗೆ ಸಂಬಂಧಿಸಿದಂತೆ ಬನವಾಸಿ ಅಭಿವೃದ್ಧಿ ಪ್ರಾಧಿಕಾರ ಎಂದು ಕರೆಯಲಾಗುವ ಒಂದು ಪ್ರಾಧಿಕಾರವನ್ನು ರಚಿಸತಕ್ಕದ್ದು.

(2) ಉತ್ತರ ಕನ್ನಡ ಜಿಲ್ಲೆಯ ಶಿರಸಿ ತಾಲ್ಲೂಕಿನ ಬನವಾಸಿಯಲ್ಲಿ ಪ್ರಾಧಿಕಾರವು ತನ್ನ ಕೇಂದ್ರ ಕಾರ್ಯಸ್ಥಾನವನ್ನು ಹೊಂದಿರತಕ್ಕದ್ದು.

(3) ಪ್ರಾಧಿಕಾರವು, ಶಾಶ್ವತ ಉತ್ತರಾಧಿಕಾರ ಮತ್ತು ಸಾಮಾನ್ಯ ಮೊಹರನ್ನು ಹೊಂದಿರುವ, ಚರ ಮತ್ತು ಸ್ಥಿರ ಸ್ವತ್ತುಗಳೆರಡನ್ನು ಅರ್ಜಿಸುವ, ಧಾರಣ ಮಾಡುವ ಮತ್ತು ವಿಲೆ ಮಾಡುವ ಹಾಗೂ ಕರಾರು ಮಾಡಿಕೊಳ್ಳುವ ಅಧಿಕಾರವನ್ನು ಹೊಂದಿರುವ, ಮೇಲೆ ಹೇಳಿದ ಹೆಸರಿನ ಒಂದು ನಿಗಮಿತ ನಿಕಾಯವಾಗಿರತಕ್ಕದ್ದು ಮತ್ತು ಸದರಿ ಹೆಸರಿನಿಂದ ದಾವೆ ಹೂಡತಕ್ಕದ್ದು ಮತ್ತು ದಾವೆಗೆ ಗುರಿಯಾಗತಕ್ಕದ್ದು.

(4) ಪ್ರಾಧಿಕಾರವು ಈ ಮುಂದಿನ ಸದಸ್ಯರನ್ನು ಒಳಗೊಂಡಿರತಕ್ಕದ್ದು, ಎಂದರೆ:-

(ಎ) ಮುಖ್ಯಮಂತ್ರಿ – ಅಧ್ಯಕ್ಷ

(ಬಿ) ಉತ್ತರ ಕನ್ನಡ ಜಿಲ್ಲೆಯ ಉಸ್ತುವಾರಿ ಮಂತ್ರಿ – ಉಪಾಧ್ಯಕ್ಷ

(ಸಿ) ಕಂದಾಯ ಇಲಾಖೆಯ ಪ್ರಭಾರ ಹೊಂದಿರುವ ಮಂತ್ರಿ – ಪದನಿಮಿತ್ತ ಸದಸ್ಯ

(ಡಿ) ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಪ್ರಭಾರ ಹೊಂದಿರುವ ಮಂತ್ರಿ – ಪದನಿಮಿತ್ತ ಸದಸ್ಯ

(ಇ) ಬನವಾಸಿ ಪ್ರದೇಶವನ್ನು ಭಾಗಶಃವಾಗಿ ಅಥವಾ ಸಂಪೂರ್ಣವಾಗಿ ಪ್ರತಿನಿಧಿಸುವ ಲೋಕಸಭಾ ಸದಸ್ಯರು ಮತ್ತು ಕರ್ನಾಟಕ ವಿಧಾನಸಭಾ ಸದಸ್ಯರು – ಸದಸ್ಯ

(ಎಫ್) ಬನವಾಸಿಯಲ್ಲಿ ನೋಂದಾಯಿತ ಮತದಾರರಾಗಿರುವ ರಾಜ್ಯಸಭೆಯ ಮತ್ತು ಕರ್ನಾಟಕ ವಿಧಾನಸಭೆಯ (ಸ್ಥಳೀಯ) ಸದಸ್ಯ – ಸದಸ್ಯ

(ಜಿ) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಅಥವಾ ಪ್ರಧಾನ ಕಾರ್ಯದರ್ಶಿ, ಅರಣ್ಯ ಇಲಾಖೆ – ಪದನಿಮಿತ್ತ ಸದಸ್ಯ

(ಎಚ್) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ – ಪದನಿಮಿತ್ತ ಸದಸ್ಯ

(ಐ) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ – ಪದನಿಮಿತ್ತ ಸದಸ್ಯ

(ಜೆ) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಪ್ರವಾಸೋದ್ಯಮ ಇಲಾಖೆ – ಪದನಿಮಿತ್ತ ಸದಸ್ಯ

(ಕೆ) ಜಿಲ್ಲಾಧಿಕಾರಿ, ಉತ್ತರ ಕನ್ನಡ, ಕಾರವಾರ – ಪದನಿಮಿತ್ತ ಸದಸ್ಯ

(ಎಲ್) ಪ್ರಾಧಿಕಾರದ ಆಯುಕ್ತ – ಸದಸ್ಯ ಕಾರ್ಯದರ್ಶಿ

(ಎಂ) ರಾಜ್ಯ ಸರ್ಕಾರವು ನಾಮನಿರ್ದೇಶನ ಮಾಡಬೇಕಾದ ಬನವಾಸಿಯ ಇತಿಹಾಸ ಮತ್ತು ಪರಂಪರೆಯಲ್ಲಿ ತಜ್ಞರಾದ ಇಬ್ಬರು ಸರ್ಕಾರೇತರ ಸದಸ್ಯರು.

**4. ಪದಾವಧಿ ಮತ್ತು ಸೇವಾ ಷರತ್ತುಗಳು.-** (1) ರಾಜ್ಯ ಸರ್ಕಾರದ ಇಚ್ಛೆಗೊಳಪಟ್ಟು, ರಾಜ್ಯ ಸರ್ಕಾರವು ನಾಮನಿರ್ದೇಶಿಸಿದ ಸರ್ಕಾರೇತರ ಸದಸ್ಯರು ಮೂರು ವರ್ಷಗಳ ಅವಧಿಗೆ ಪದಧಾರಣ ಮಾಡತಕ್ಕದ್ದು.

(2) ಯಾವೊಬ್ಬ ಸರ್ಕಾರೇತರ ಸದಸ್ಯನು, ತನ್ನ ಸಹಿಯೊಂದಿಗೆ ರಾಜ್ಯ ಸರ್ಕಾರಕ್ಕೆ ಬರೆಯುವ ಮೂಲಕ ತನ್ನ ಪದಕ್ಕೆ ರಾಜೀನಾಮೆ ನೀಡಬಹುದು. ಆದರೆ ಆತನ ರಾಜೀನಾಮೆಯು ಅಂಗೀಕಾರವಾಗುವವರೆಗೂ ಪದದಲ್ಲಿ ಮುಂದುವರೆಯತಕ್ಕದ್ದು.

(3) ಸರ್ಕಾರೇತರ ಸದಸ್ಯರು ನಿಯಮಿಸಬಹುದಾದಂಥ ಭತ್ಯಗಳನ್ನು ಪಡೆಯತಕ್ಕದ್ದು.

5. ಸದಸ್ಯತ್ವದ ಪದಕ್ಕೆ ಅನರ್ಹತೆಗಳು – ಒಬ್ಬ ವ್ಯಕ್ತಿಯು,-

(ಎ) ರಾಜ್ಯ ಸರ್ಕಾರದ ಅಭಿಪ್ರಾಯದಲ್ಲಿ ನೈತಿಕ ಅಧಃಪತನವನ್ನೊಳಗೊಳ್ಳುವ ಒಂದು ಅಪರಾಧಕ್ಕಾಗಿ ಅಪರಾಧಿ ಎಂದು ನಿರ್ಣೀತನಾಗಿದ್ದು [illegible]

(2) ಇದು, 2ನೇ ಪ್ರಕರಣದ (ಸಿ)ಖಂಡದಲ್ಲಿ ಪರಿಭಾಷಿಸಿದಂತೆ ಕಿತ್ತೂರು ಗ್ರಾಮದ ಪ್ರದೇಶಕ್ಕೆ ವ್ಯಾಪ್ತವಾಗತಕ್ಕದ್ದು.

(3) ಇದು, ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.**– ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) "ಸೌಕರ್ಯ" ಎಂಬುದರಲ್ಲಿ ರಸ್ತೆಗಳು, ಬೀದಿಗಳು, ಸುರಂಗ ಮಾರ್ಗಗಳು, ದೀಪದ ವ್ಯವಸ್ಥೆ, ಚರಂಡಿ ವ್ಯವಸ್ಥೆ, ನೈರ್ಮಲೀಕರಣ, ವಿದ್ಯುಚ್ಛಕ್ತಿ ಮತ್ತು ನೀರು ಸರಬರಾಜು ಅಥವಾ ಇತರ ಅನುಕೂಲತೆಗಳು, ಲೋಕೋಪಯೋಗಿ ಕಾಮಗಾರಿಗಳು, ಮಾರುಕಟ್ಟೆ ಸ್ಥಳಗಳು, ಆಸ್ಪತ್ರೆಗಳು, ಚಿಕಿತ್ಸಾಲಯಗಳು, ಗ್ರಂಥಾಲಯಗಳು, ಮನರಂಜನಾ ಕೇಂದ್ರಗಳು, ಪ್ರಾಧಿಕಾರವು ಅಧಿಕೃತಗೊಳಿಸಿದ ಯಾವುದೇ ಸಾರ್ವಜನಿಕ ಉಪಯುಕ್ತ ಸೇವೆಯ ಸೇವಾ ಕೇಂದ್ರಗಳು ಅಥವಾ ಇತರ ಸೌಲಭ್ಯ ಮತ್ತು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಇತರ ಸೌಕರ್ಯಗಳನ್ನು ಒಳಗೊಳ್ಳುತ್ತದೆ;

(ಬಿ) "ಪ್ರಾಧಿಕಾರ" ಎಂದರೆ, 3ನೇ ಪ್ರಕರಣದ ಅಡಿಯಲ್ಲಿ ರಚಿಸಿದ ಕಿತ್ತೂರು ಅಭಿವೃದ್ಧಿ ಪ್ರಾಧಿಕಾರ;

(ಸಿ) "ಕಿತ್ತೂರು" ಎಂದರೆ, ಕಿತ್ತೂರು ಗ್ರಾಮದ ಹಾಗೂ ಕಿತ್ತೂರು ಗ್ರಾಮಪಂಚಾಯಿತಿಯ ಮಿತಿಗಳು ಮತ್ತು ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲ್ಲೂಕಿನಲ್ಲಿರುವ ಕಿತ್ತೂರು ಗ್ರಾಮವ್ಯಾಪ್ತಿಯ ಪ್ರದೇಶ ಮತ್ತು ಕಿತ್ತೂರಿನಲ್ಲಿರುವ ಪಾರಂಪರಿಕ ತಾಣಗಳ ಅಭಿವೃದ್ಧಿಗಾಗಿ ರಾಜ್ಯ ಸರ್ಕಾರವು ಕಾಲಕಾಲಕ್ಕೆ ಆರ್ಜಿಸಿದ ಭೂಮಿ ಮತ್ತು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಘೋಷಿಸಲಾದ ಅಂಥ ಇತರ ಪ್ರದೇಶ ಮತ್ತು ಇವುಗಳೆಲ್ಲವನ್ನೂ ಒಳಗೊಳ್ಳುತ್ತದೆ;

(ಡಿ) "ಅಧ್ಯಕ್ಷ" ಎಂದರೆ, ಪ್ರಾಧಿಕಾರದ ಅಧ್ಯಕ್ಷ;

(ಇ) "ಆಯುಕ್ತ" ಎಂದರೆ, 10ನೇ ಪ್ರಕರಣದ ಅಡಿಯಲ್ಲಿ ನೇಮಕ ಮಾಡಿದ ಪ್ರಾಧಿಕಾರದ ಆಯುಕ್ತ;

(ಎಫ್) "ನಿಧಿ" ಎಂದರೆ, ಪ್ರಾಧಿಕಾರದ ನಿಧಿ;

(ಜಿ) "ಪರಂಪರೆಯ ತಾಣ" ಎಂದರೆ, ಪ್ರಾಚೀನ ಸ್ಮಾರಕಗಳು ಮತ್ತು ಪುರಾತತ್ವ ಸ್ಥಳಗಳು ಹಾಗೂ ಅವಶೇಷಗಳ ಅಧಿನಿಯಮ, 1958ರ (1958ರ ಕೇಂದ್ರ ಅಧಿನಿಯಮ ಸಂಖ್ಯೆ 24) ಅಡಿಯಲ್ಲಿ ಸಂರಕ್ಷಿತ ಪ್ರದೇಶವೆಂದು ಉಲ್ಲೇಖಿಸಲಾದ ಪ್ರದೇಶವನ್ನು ಹೊರತುಪಡಿಸಿ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ತಾಣಗಳನ್ನು ಒಳಗೊಳ್ಳುವ ಸಂಪೂರ್ಣ ಪ್ರದೇಶವಾಗಿದೆ;

(ಹೆಚ್) "ಸದಸ್ಯ" ಎಂದರೆ, ಪ್ರಾಧಿಕಾರದ ಸದಸ್ಯ

(ಐ) "ವಿನಿಯಮಗಳು" ಎಂದರೆ, 41ನೇ ಪ್ರಕರಣದ ಮೇರೆಗೆ ರಚಿಸಿದ ಪ್ರಾಧಿಕಾರದ ವಿನಿಯಮಗಳು:

(ಜೆ) "ಅನುಸೂಚಿ" ಎಂದರೆ, ಈ ಅಧಿನಿಯಮಕ್ಕೆ ಲಗತ್ತಿಸಿದ ಅನುಸೂಚಿ.

## ಅಧ್ಯಾಯ – II

## ಪ್ರಾಧಿಕಾರಗಳು ಮತ್ತು ಅದರ ಉದ್ಯೋಗಿಗಳು

**3. ಕಿತ್ತೂರು ಅಭಿವೃದ್ಧಿ ಪ್ರಾಧಿಕಾರ.**– (1) ಈ ಅಧಿನಿಯಮದ ಪ್ರಾರಂಭದ ತರುವಾಯ ಆದಷ್ಟು ಬೇಗನೆ, ಈ ಅಧಿನಿಯಮದ ಉದ್ದೇಶಗಳಿಗಾಗಿ ಕಿತ್ತೂರು ಅಭಿವೃದ್ಧಿ ಪ್ರಾಧಿಕಾರ ಎಂದು ಕರೆಯಲಾಗುವ ಒಂದು ಪ್ರಾಧಿಕಾರವನ್ನು ರಚಿಸತಕ್ಕದ್ದು.

ಪ್ರಾಗತಿಕ್ಕದ್ದು
ಜಾರಿಗೆ

(2) ಪ್ರಾಧಿಕಾರವು ಕಾಲಕಾಲಕ್ಕೆ ನಿರ್ಧರಿಸಬಹುದಾದ ಅಂಥ ಸ್ಥಳದಲ್ಲಿ ಪ್ರಾಧಿಕಾರವು ತನ್ನ ಕೇಂದ್ರ ಕಾರ್ಯಸ್ಥಾನವನ್ನು ಹೊಂದಿರತಕ್ಕದ್ದು.

(3) ಪ್ರಾಧಿಕಾರವು, ಶಾಶ್ವತ ಉತ್ತರಾಧಿಕಾರ ಮತ್ತು ಸಾಮಾನ್ಯ ಮೊಹರನ್ನು ಹೊಂದಿರುವ, ಚರ ಮತ್ತು ಸ್ಥಿರ ಸ್ವತ್ತುಗಳೆರಡನ್ನು ಆರ್ಜಿಸುವ, ಧಾರಣ ಮಾಡುವ ಮತ್ತು ವಿಲೆ ಮಾಡುವ ಮತ್ತು ಕರಾರು ಮಾಡಿಕೊಳ್ಳುವ ಅಧಿಕಾರವನ್ನು ಹೊಂದಿರುವ, ಮೇಲೆ ಹೇಳಿದ ಹೆಸರಿನ ಒಂದು ನಿಗಮಿತ ನಿಕಾಯವಾಗಿರತಕ್ಕದ್ದು ಮತ್ತು ಸದರಿ ಹೆಸರಿನಿಂದ ದಾವೆ ಹೂಡತಕ್ಕದ್ದು ಮತ್ತು ದಾವೆಗೆ ಗುರಿಯಾಗತಕ್ಕದ್ದು.

(4) ಪ್ರಾಧಿಕಾರವು ಈ ಮುಂದಿನ ಸದಸ್ಯರನ್ನು ಒಳಗೊಂಡಿರತಕ್ಕದ್ದು, ಎಂದರೆ:-

(ಎ) ಮುಖ್ಯ ಮಂತ್ರಿಯವರು ಪ್ರಾಧಿಕಾರದ ಪದನಿಮಿತ್ತ ಅಧ್ಯಕ್ಷರಾಗಿರತಕ್ಕದ್ದು;

(ಬಿ) ಬೆಳಗಾವಿ ಜಿಲ್ಲೆಯ ಉಸ್ತುವಾರಿ ಪ್ರಭಾರದಲ್ಲಿರುವ ಸಚಿವರು ಪ್ರಾಧಿಕಾರದ ಪದನಿಮಿತ್ತ ಉಪಾಧ್ಯಕ್ಷರಾಗಿರತಕ್ಕದ್ದು;

(ಸಿ) ಕನ್ನಡ ಮತ್ತು ಸಂಸ್ಕೃತಿ ಸಚಿವರು – ಪದನಿಮಿತ್ತ ಸದಸ್ಯರು;

(ಡಿ) ಕಂದಾಯ ಸಚಿವರು – ಪದನಿಮಿತ್ತ ಸದಸ್ಯರು;

(ಇ) ಪ್ರವಾಸೋದ್ಯಮ ಸಚಿವರು – ಪದನಿಮಿತ್ತ ಸದಸ್ಯರು;

(ಎಫ್) ಲೋಕೋಪಯೋಗಿ ಸಚಿವರು – ಪದನಿಮಿತ್ತ ಸದಸ್ಯರು;

(ಜಿ) ಕಿತ್ತೂರು ಗ್ರಾಮವು ಭಾಗಶ: ಅಥವಾ ಸಂಪೂರ್ಣವಾಗಿ ಯಾರ ಚುನಾವಣಾ ಕ್ಷೇತ್ರದ ವ್ಯಾಪ್ತಿಯೊಳಗೆ ಬರುತ್ತದೋ ಆ ಕ್ಷೇತ್ರವನ್ನು ಪ್ರತಿನಿಧಿಸುವ ಸಂಸತ್ ಸದಸ್ಯರು ಮತ್ತು ರಾಜ್ಯ ವಿಧಾನಮಂಡಲದ ಸದಸ್ಯರು – ಸದಸ್ಯರು;

(ಹೆಚ್) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ – ಪದನಿಮಿತ್ತ ಸದಸ್ಯರು;

(ಐ) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ – ಪದನಿಮಿತ್ತ ಸದಸ್ಯರು;

(ಜೆ) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಹಣಕಾಸು ಇಲಾಖೆ – ಪದನಿಮಿತ್ತ ಸದಸ್ಯರು;

(ಕೆ) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ – ಪದನಿಮಿತ್ತ ಸದಸ್ಯರು;

(ಎಲ್) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ – ಪದನಿಮಿತ್ತ ಸದಸ್ಯರು;

(ಎಂ) ಪ್ರಾದೇಶಿಕ ಆಯುಕ್ತರು, ಬೆಳಗಾವಿ; – ಪದನಿಮಿತ್ತ ಸದಸ್ಯರು;

(ಎನ್) ಬೆಳಗಾವಿ ಜಿಲ್ಲೆಯ ಜಿಲ್ಲಾಧಿಕಾರಿಯವರು – ಪದನಿಮಿತ್ತ ಸದಸ್ಯರು;

(ಒ) ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ವಸ್ತು ಸಂಗ್ರಹಾಲಯ ಇಲಾಖೆ – ಪದನಿಮಿತ್ತ ಸದಸ್ಯರು;

(ಪಿ) ಜಂಟಿ –ನಿರ್ದೇಶಕರು, ಕರ್ನಾಟಕ ಭೂ ಸೇನಾ ನಿಗಮ, ಬೆಳಗಾವಿ – ಪದನಿಮಿತ್ತ ಸದಸ್ಯರು;

(ಕ್ಯೂ) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಬೆಳಗಾವಿ – ಪದನಿಮಿತ್ತ ಸದಸ್ಯರು;

(ಆರ್) ಕಾರ್ಯನಿರ್ವಾಹಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಬೆಳಗಾವಿ – ಪದನಿಮಿತ್ತ ಸದಸ್ಯರು

(ಎಸ್) ಅಧ್ಯಕ್ಷರು, ಗ್ರಾಮಪಂಚಾಯಿತಿ, ಕಿತ್ತೂರು – ಪದನಿಮಿತ್ತ ಸದಸ್ಯರು

(ಟಿ) ರಾಜ್ಯ ಸರ್ಕಾರದಿಂದ ನಾಮನಿರ್ದೇಶಿತರಾದ ಮೂರು ಜನರ ಸಂಖ್ಯೆಯನ್ನು ಮೀರದಂತೆ ಸರ್ಕಾರೇತರ ಸದಸ್ಯರು – ಸದಸ್ಯರು

(ಯು) ರಾಜ್ಯ ಸರ್ಕಾರದಿಂದ ನಾಮನಿರ್ದೇಶಿತರಾದ ಕಿತ್ತೂರಿನ ಇತಿಹಾಸ ಮತ್ತು ಪರಂಪರೆಯಲ್ಲಿ ಆಳವಾದ ಜ್ಞಾನ ಹೊಂದಿರುವ ಐದು ಜನರ ಸಂಖ್ಯೆಯನ್ನು ಮೀರದಷ್ಟು ವ್ಯಕ್ತಿಗಳು – ಸದಸ್ಯರು

(ವಿ) ಪ್ರಾಧಿಕಾರದ ಆಯುಕ್ತರು – ಸದಸ್ಯ ಕಾರ್ಯದರ್ಶಿ

**4. ಪದಾವಧಿ ಮತ್ತು ಸೇವಾ ಷರತ್ತುಗಳು.**– (1) ರಾಜ್ಯ ಸರ್ಕಾರದ ಇಚ್ಛೆಗೊಳಪಟ್ಟು, ರಾಜ್ಯ ಸರ್ಕಾರವು ನಾಮನಿರ್ದೇಶಿಸಿದ ಸರ್ಕಾರೇತರ ಸದಸ್ಯರು ಮೂರು ವರ್ಷಗಳ ಅವಧಿಗೆ ಪದಧಾರಣ ಮಾಡತಕ್ಕದ್ದು.

(2) ಯಾವೊಬ್ಬ ಸರ್ಕಾರೇತರ ಸದಸ್ಯನು ತನ್ನ ಸಹಿಯೊಂದಿಗೆ ರಾಜ್ಯ ಸರ್ಕಾರಕ್ಕೆ ಬರೆಯುವ ಮೂಲಕ ತನ್ನ ಪದಕ್ಕೆ ರಾಜೀನಾಮೆ ನೀಡಬಹುದು. ಆದರೆ ಅವನ ರಾಜೀನಾಮೆಯು ಅಂಗೀಕಾರವಾಗುವವರೆಗೂ ಪದದಲ್ಲಿ ಮುಂದುವರೆಯತಕ್ಕದ್ದು.

(3) ಸರ್ಕಾರೇತರ ಸದಸ್ಯರು ನಿಯಮಿಸಬಹುದಾದಂಥ ಭತ್ಯಗಳನ್ನು ಪಡೆಯತಕ್ಕದ್ದು.

**5. ಸದಸ್ಯನ ಪದಕ್ಕೆ ಅನರ್ಹತೆಗಳು.**– ಸರ್ಕಾರೇತರ ಸದಸ್ಯರು,–

(ಎ) ರಾಜ್ಯ ಸರ್ಕಾರದ ಅಭಿಪ್ರಾಯದಲ್ಲಿ ನೈತಿಕ ಅಧಃಪತನವನ್ನೊಳಗೊಳ್ಳುವ ಒಂದು ಅಪರಾಧಕ್ಕಾಗಿ ಅಪರಾಧಿ ಎಂದು ನಿರ್ಣೀತನಾಗಿದ್ದು ಕಾರಾವಾಸದ ಶಿಕ್ಷೆಗೆ ಗುರಿಯಾಗಿದ್ದರೆ; ಅಥವಾ

(ಬಿ) ಅಸ್ವಸ್ಥ ಚಿತ್ತದವನಾಗಿದ್ದರೆ ಮತ್ತು ಹಾಗೆಂದು ಸಕ್ಷಮ ನ್ಯಾಯಾಲಯದಿಂದ ಘೋಷಿತನಾಗಿದ್ದರೆ; ಅಥವಾ

(ಸಿ) ಅವಿಮುಕ್ತ ದಿವಾಳಿಯಾಗಿದ್ದರೆ; ಅಥವಾ

(ಡಿ) ಕೇಂದ್ರ ಸರ್ಕಾರದ ಅಥವಾ ರಾಜ್ಯ ಸರ್ಕಾರದ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರವು ಒಡೆತನ ಹೊಂದಿರುವ ಅಥವಾ ನಿಯಂತ್ರಣ ಹೊಂದಿರುವ ಒಂದು ಸಂಸ್ಥೆ ಅಥವಾ ನಿಗಮದ ಸೇವೆಯಿಂದ ತೆಗೆದು ಹಾಕಿದವನಾಗಿದ್ದರೆ ಅಥವಾ ವಜಾ ಮಾಡಿದವನಾಗಿದ್ದರೆ; ಅಥವಾ

(ಇ) ಪ್ರಾಧಿಕಾರದ ಆದೇಶದಿಂದ ಮಾಡಲಾದ ಯಾವುದೇ ಕಾರ್ಯದಲ್ಲಿ ಅಥವಾ ಪ್ರಾಧಿಕಾರದೊಡನೆ ಅಥವಾ ಅದರ ಅಡಿಯಲ್ಲಿ ಅಥವಾ ಅದರ ಮೂಲಕ ಅಥವಾ ಅದರ ಪರವಾದ ಯಾವುದೇ ಕರಾರು ಅಥವಾ ನಿಯೋಜನೆಯಲ್ಲಿ ಸ್ವತಃ ಅವನು ಅಥವಾ ಪಾಲುದಾರನಾಗಿ ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಯಾವುದೇ ಷೇರನ್ನು ಅಥವಾ ಹಿತಾಸಕ್ತಿಯನ್ನು ಹೊಂದಿದ್ದರೆ; ಅಥವಾ

## ಅಧ್ಯಾಯ - II

## ಪ್ರಾಧಿಕಾರ ಮತ್ತು ಅದರ ಉದ್ಯೋಗಿಗಳು

3. ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರ.- (1) ಈ ಅಧಿನಿಯಮದ ಪ್ರಾರಂಭದ ತರುವಾಯ ಆದಷ್ಟು ಬೇಗನೆ, ಈ ಅಧಿನಿಯಮದ ಉದ್ದೇಶಗಳಿಗಾಗಿ, 'ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರ' ಎಂದು ಕರೆಯಲಾಗುವ ಒಂದು ಪ್ರಾಧಿಕಾರವನ್ನು ಸ್ಥಾಪಿಸತಕ್ಕದ್ದು.

(2) ಪ್ರಾಧಿಕಾರವು ಸರ್ಕಾರಕ್ಕೆ ನಿರ್ಧರಿಸಬಹುದಾದಂಥ ಸ್ಥಳದಲ್ಲಿ ತನ್ನ ಕೇಂದ್ರ ಕಾರ್ಯಸ್ಥಾನವನ್ನು ಹೊಂದಿರತಕ್ಕದ್ದು.

(3) ಪ್ರಾಧಿಕಾರವು, ಶಾಶ್ವತ ಉತ್ತರಾಧಿಕಾರ ಮತ್ತು ಸಾಮಾನ್ಯ ಮೊಹರನ್ನು ಹೊಂದಿರುವ, ಚರ ಮತ್ತು ಸ್ಥಿರ ಸ್ವತ್ತುಗಳೆರಡನ್ನೂ ಅರ್ಜಿಸುವ, ಧಾರಣ ಮಾಡುವ ಹಾಗೂ ವಿಲೆ ಮಾಡುವ ಮತ್ತು ಕರಾರು ಮಾಡಿಕೊಳ್ಳುವ ಅಧಿಕಾರವನ್ನು ಹೊಂದಿರುವ, ಮೇಲೆ ಹೇಳಿದ ಹೆಸರಿನ ಒಂದು ನಿಗಮಿತ ನಿಕಾಯವಾಗಿರತಕ್ಕದ್ದು ಮತ್ತು ಸದರಿ ಹೆಸರಿನಿಂದ ದಾವೆ ಹೂಡತಕ್ಕದ್ದು ಮತ್ತು ದಾವೆಗೆ ಗುರಿಯಾಗತಕ್ಕದ್ದು.

(4) ಪ್ರಾಧಿಕಾರವು, ಈ ಮುಂದಿನ ಸದಸ್ಯರನ್ನು ಒಳಗೊಂಡಿರತಕ್ಕದ್ದು, ಎಂದರೆ-

(ಎ) ಮುಖ್ಯಮಂತ್ರಿಗಳು, ಇವರು ಪ್ರಾಧಿಕಾರದ ಪದನಿಮಿತ್ತ ಅಧ್ಯಕ್ಷರಾಗಿರತಕ್ಕದ್ದು;

(ಬಿ) ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವರು;

(ಸಿ) ಕಂದಾಯ ಇಲಾಖೆಯ ಸಚಿವರು;

(ಡಿ) ಆರ್ಥಿಕ ಇಲಾಖೆಯ ಸಚಿವರು;

(ಇ) ಹಾವೇರಿ ಜಿಲ್ಲೆಯ ಉಸ್ತುವಾರಿ ಸಚಿವರು;

(ಎಫ್) ಕಾಗಿನೆಲೆ ಹಾಗೂ ಬಾಡ ಗ್ರಾಮಗಳ ಕ್ಷೇತ್ರವನ್ನು ಭಾಗಶಃ ಅಥವಾ ಪೂರ್ಣವಾಗಿ ಪ್ರತಿನಿಧಿಸುವ ಹಾಗೂ ಅದರ ಎಲ್ಲೆಗಳೊಳಗೆ ತಮ್ಮ ಮತದಾನ ಕ್ಷೇತ್ರವನ್ನು ಹೊಂದಿರುವ ಸಂಸತ್ ಸದಸ್ಯರು ಮತ್ತು ರಾಜ್ಯ ವಿಧಾನಮಂಡಲದ ಸದಸ್ಯರು;

(ಜಿ) ಅಧ್ಯಕ್ಷರು, ಜಿಲ್ಲಾ ಪಂಚಾಯಿತಿ, ಹಾವೇರಿ; ಸದಸ್ಯರು

(ಎಚ್) ಸಂತ ಕವಿ ಕನಕದಾಸರು ಅಂಗೀಕರಿಸಿ ಸಾರಿದ ತತ್ವಗಳ ಅನುಷ್ಠಾನಕ್ಕಾಗಿ ದುಡಿದಂಥ, ರಾಜ್ಯಸರ್ಕಾರವು ನಾಮನಿರ್ದೇಶಿಸಿದ ಐವರಿಗೆ ಮೀರದ ಸದಸ್ಯರು, ಅವರುಗಳಲ್ಲಿ ಒಬ್ಬರು ದೇವಾಲಯ ವಾಸ್ತುಶಿಲ್ಪದ ಜ್ಞಾನ ಮತ್ತು ಹತ್ತು ವರ್ಷಗಳಿಗಿಂತ ಕಡಿಮೆಯಿಲ್ಲದ ಕೆಲಸದ ಅನುಭವ ಹೊಂದಿರುವ ಸಿವಿಲ್ ಇಂಜಿನಿಯರ್ ಅಥವಾ ವಾಸ್ತುಶಿಲ್ಪಿಯಾಗಿರತಕ್ಕದ್ದು

(ಐ) ಸರ್ಕಾರದ ಕಾರ್ಯದರ್ಶಿಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ;

(ಜೆ) ಸರ್ಕಾರದ ಕಾರ್ಯದರ್ಶಿಗಳು, ಕಂದಾಯ ಇಲಾಖೆ;

(ಕೆ) ಸರ್ಕಾರದ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ;

(ಎಲ್) ಸರ್ಕಾರದ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ;

(ಎಮ್) ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ; ಸದಸ್ಯರು

(ಎನ್) ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ವಸ್ತು ಸಂಗ್ರಹಾಲಯ ಇಲಾಖೆ; ಸದಸ್ಯರು

(ಓ) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಕೆರೆ ಅಭಿವೃದ್ಧಿ ಪ್ರಾಧಿಕಾರ; ಸದಸ್ಯರು

(ಪಿ) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾಪಂಚಾಯಿತಿ, ಹಾವೇರಿ; ಸದಸ್ಯರು

(ಕ್ಯೂ) ಪರಂಪರೆ ಆಯುಕ್ತರು; ಸದಸ್ಯರು

(ಆರ್) ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ; ಸದಸ್ಯರು

(ಎಸ್) ಆಯುಕ್ತರು, ಪ್ರವಾಸೋದ್ಯಮ ಇಲಾಖೆ; ಸದಸ್ಯರು

(ಟಿ) ನಿರ್ದೇಶಕರು, ಪಟ್ಟಣ ಮತ್ತು ಗ್ರಾಮಾಂತರ ಯೋಜನೆ, ಸದಸ್ಯರು

(ಯು) ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯಿತಿ, ಬ್ಯಾಡಗಿ, ಸದಸ್ಯರು

(ವಿ) ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯಿತಿ, ಶಿಗ್ಗಾಂವ, ಸದಸ್ಯರು

(ಡಬ್ಲ್ಯು) ಅಧ್ಯಕ್ಷರು, ಗ್ರಾಮ ಪಂಚಾಯಿತಿ, ಕಾಗಿನೆಲೆ, ಸದಸ್ಯರು

(ಎಕ್ಸ್) ಅಧ್ಯಕ್ಷರು, ಗ್ರಾಮ ಪಂಚಾಯಿತಿ, ಬಾಡ, ಸದಸ್ಯರು

(ವೈ) ಪ್ರಾಧಿಕಾರದ ಆಯುಕ್ತರು, ಸದಸ್ಯ-ಕಾರ್ಯದರ್ಶಿ

4. ಪದಾವಧಿ ಮತ್ತು ಸೇವಾ ಷರತ್ತುಗಳು.- (1) ರಾಜ್ಯ ಸರ್ಕಾರದ ಇಚ್ಛೆಗೊಳಪಟ್ಟು, ರಾಜ್ಯ ಸರ್ಕಾರವು ನಾಮನಿರ್ದೇಶಿಸಿದ ಅಧಿಕಾರೇತರ ಸದಸ್ಯರು ಮೂರು ವರ್ಷಗಳ ಅವಧಿಗೆ ಪದಧಾರಣ ಮಾಡತಕ್ಕದ್ದು.

(2) ಯಾವೊಬ್ಬ ಅಧಿಕಾರೇತರ ಸದಸ್ಯನು ರಾಜ್ಯ ಸರ್ಕಾರಕ್ಕೆ ಪತ್ರ ಬರೆದು ಅದಕ್ಕೆ ತನ್ನ ಸಹಿ ಹಾಕಿ ತನ್ನ ಪದಕ್ಕೆ ರಾಜೀನಾಮೆ ನೀಡಬಹುದು, ಆದರೆ ತನ್ನ ರಾಜೀನಾಮೆಯು ಅಂಗೀಕಾರವಾಗುವವರೆಗೂ ತನ್ನ ಪದದಲ್ಲಿ ಮುಂದುವರಿಯತಕ್ಕದ್ದು.

(3) ಅಧಿಕಾರೇತರ ಸದಸ್ಯರು ನಿಯಮಿಸಬಹುದಾದಂಥ ಭತ್ಯೆಗಳನ್ನು ಪಡೆಯತಕ್ಕದ್ದು.

5. ಸದಸ್ಯತ್ವಕ್ಕೆ ಅನರ್ಹತೆಗಳು.- ಒಬ್ಬ ವ್ಯಕ್ತಿಯು,-

(ಎ) ರಾಜ್ಯ ಸರ್ಕಾರದ ಅಭಿಪ್ರಾಯದಲ್ಲಿ ನೈತಿಕ ಅಧಃಪತನವನ್ನೊಳಗೊಳ್ಳುವ ಒಂದು ಅಪರಾಧಕ್ಕಾಗಿ ಅಪರಾಧಿ ಎಂದು ನಿರ್ಣೀತನಾಗಿದ್ದು ಕಾರಾವಾಸದ ಶಿಕ್ಷೆಗೆ ಗುರಿಯಾಗಿದ್ದರೆ; ಅಥವಾ

(ಬಿ) ಅಸ್ವಸ್ಥ ಚಿತ್ತದವನಾಗಿದ್ದರೆ ಮತ್ತು ಹಾಗೆಂದು ಸಕ್ಷಮ ನ್ಯಾಯಾಲಯದಿಂದ ಘೋಷಿತನಾಗಿದ್ದರೆ; ಅಥವಾ

(ಸಿ) ಅವಿಮುಕ್ತ ದಿವಾಳಿಯಾಗಿದ್ದರೆ; ಅಥವಾ

(ಡಿ) ಕೇಂದ್ರ ಸರ್ಕಾರದ ಅಥವಾ ಒಂದು ರಾಜ್ಯ ಸರ್ಕಾರದ ಅಥವಾ ಕೇಂದ್ರ ಸರ್ಕಾರ ಅಥವಾ ಒಂದು ರಾಜ್ಯ ಸರ್ಕಾರವು ಒಡೆತನ ಹೊಂದಿರುವ ಅಥವಾ ನಿಯಂತ್ರಣ ಹೊಂದಿರುವ ಒಂದು ನಿಕಾಯ ಅಥವಾ ನಿಗಮದ ಸೇವೆಯಿಂದ ತೆಗೆದು ಹಾಕಲಾದ ವ್ಯಕ್ತಿಯಾಗಿದ್ದರೆ ಅಥವಾ ವಜಾ ಮಾಡಲಾದ ವ್ಯಕ್ತಿಯಾಗಿದ್ದರೆ; ಅಥವಾ

(ಇ) ಪ್ರಾಧಿಕಾರದ ಆದೇಶದಿಂದ ಮಾಡಲಾದ ಯಾವುದೇ ಕಾಮಗಾರಿಯಲ್ಲಿ ಅಥವಾ ಪ್ರಾಧಿಕಾರದೊಡನೆ ಅಥವಾ ಅದರ ಅಡಿಯಲ್ಲಿ ಅಥವಾ ಅದರ ಮೂಲಕ ಅಥವಾ ಅದರ ಪರವಾಗಿ ಮಾಡಿಕೊಂಡ ಯಾವುದೇ ಕರಾರು ಅಥವಾ ನಿಯೋಜನೆಯಲ್ಲಿ ಸ್ವಯಂ ತಾನೇ ಅಥವಾ ಒಬ್ಬ ಪಾಲುದಾರನ ಅಥವಾ ಏಜೆಂಟನ ಮೂಲಕ ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಯಾವುದೇ ಷೇರನ್ನು ಅಥವಾ ಹಿತಾಸಕ್ತಿಯನ್ನು ಹೊಂದಿದ್ದರೆ; ಅಥವಾ

ಪ್ರದೇಶವನ್ನು ಹೊರತುಪಡಿಸಿ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ತಾಣಗಳನ್ನು ಒಳಗೊಳ್ಳುವ ಸಂಪೂರ್ಣ ಪ್ರದೇಶ ಮತ್ತು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಘೋಷಿಸಬಹುದಾದ ಅಂಥ ಇತರ ಪ್ರದೇಶಗಳು;

(ಹೆಚ್) "ಸದಸ್ಯ" ಎಂದರೆ, ಪ್ರಾಧಿಕಾರದ ಒಬ್ಬ ಸದಸ್ಯ;

(ಐ) "ವಿನಿಯಮಗಳು" ಎಂದರೆ, 42ನೇ ಪ್ರಕರಣದ ಅಡಿಯಲ್ಲಿ ರಚಿಸಿದ ಪ್ರಾಧಿಕಾರದ ವಿನಿಯಮಗಳು;

(ಜೆ) "ಅನುಸೂಚಿ" ಎಂದರೆ, ಈ ಅಧಿನಿಯಮಕ್ಕೆ ಲಗತ್ತಿಸಿದ ಅನುಸೂಚಿ.

## ಅಧ್ಯಾಯ - II

## ಪ್ರಾಧಿಕಾರ ಮತ್ತು ಅದರ ಉದ್ದೇಶಗಳು

**3. ಸರ್ವಜ್ಞ ಕ್ಷೇತ್ರ ಅಭಿವೃದ್ಧಿ ಪ್ರಾಧಿಕಾರ.**- (1) ರಾಜ್ಯ ಸರ್ಕಾರವು, ಈ ಅಧಿನಿಯಮದ ಪ್ರಾರಂಭದ ತರುವಾಯ ಆದಷ್ಟು ಬೇಗನೆ, ಈ ಅಧಿನಿಯಮದ ಉದ್ದೇಶಗಳಿಗಾಗಿ ಸರ್ವಜ್ಞ ಕ್ಷೇತ್ರ ಅಭಿವೃದ್ಧಿ ಪ್ರಾಧಿಕಾರ ಎಂದು ಕರೆಯಲಾಗುವ ಒಂದು ಪ್ರಾಧಿಕಾರವನ್ನು ರಚಿಸತಕ್ಕದ್ದು.

(2) ಪ್ರಾಧಿಕಾರವು ಕಾಲಕಾಲಕ್ಕೆ ನಿರ್ಧರಿಸಬಹುದಾದ ಅಂಥ ಸ್ಥಳದಲ್ಲಿ ತನ್ನ ಕೇಂದ್ರ ಕಾರ್ಯಸ್ಥಾನವನ್ನು ಪ್ರಾಧಿಕಾರವು ಹೊಂದಿರತಕ್ಕದ್ದು.

(3) ಪ್ರಾಧಿಕಾರವು, ಶಾಶ್ವತ ಉತ್ತರಾಧಿಕಾರ ಮತ್ತು ಸಾಮಾನ್ಯ ಮೊಹರನ್ನು ಹೊಂದಿರುವ, ಚರ ಮತ್ತು ಸ್ಥಿರ ಸ್ವತ್ತುಗಳೆರಡನ್ನು ಆರ್ಜಿಸುವ, ಧಾರಣ ಮಾಡುವ ಮತ್ತು ವಿಲೆ ಮಾಡುವ ಹಾಗೂ ಕರಾರು ಮಾಡಿಕೊಳ್ಳುವ ಅಧಿಕಾರವನ್ನು ಹೊಂದಿರುವ, ಮೇಲೆ ಹೇಳಿದ ಹೆಸರಿನ ಒಂದು ನಿಗಮಿತ ನಿಕಾಯವಾಗಿರತಕ್ಕದ್ದು ಮತ್ತು ಸದರಿ ಹೆಸರಿನಿಂದ ದಾವೆ ಹೂಡತಕ್ಕದ್ದು ಮತ್ತು ದಾವೆಗೆ ಗುರಿಯಾಗತಕ್ಕದ್ದು.

(4) ಪ್ರಾಧಿಕಾರವು ಈ ಮುಂದಿನ ಸದಸ್ಯರನ್ನು ಒಳಗೊಂಡಿರತಕ್ಕದ್ದು, ಎಂದರೆ:-

(ಎ) ಮುಖ್ಯ ಮಂತ್ರಿಯವರು ಅಧ್ಯಕ್ಷರಾಗಿರತಕ್ಕದ್ದು;

(ಬಿ) ಹಾವೇರಿ ಜಿಲ್ಲೆಯ ಉಸ್ತುವಾರಿಯಲ್ಲಿರುವ ಮಂತ್ರಿಗಳು ಉಪಾಧ್ಯಕ್ಷರಾಗಿರತಕ್ಕದ್ದು;

| | |
|---|---|
| (ಸಿ) ಕನ್ನಡ ಮತ್ತು ಸಂಸ್ಕೃತಿ ಮಂತ್ರಿಗಳು | - ಸದಸ್ಯರು |
| (ಡಿ) ಕಂದಾಯ ಮಂತ್ರಿಗಳು | - ಸದಸ್ಯರು |
| (ಇ) ಹಣಕಾಸು ಮಂತ್ರಿಗಳು | - ಸದಸ್ಯರು |
| (ಎಫ್) ಪ್ರವಾಸೋದ್ಯಮ ಮಂತ್ರಿಗಳು | - ಸದಸ್ಯರು |
| (ಜಿ) ಲೋಕೋಪಯೋಗಿ ಮಂತ್ರಿಗಳು | - ಸದಸ್ಯರು |
| (ಎಚ್) ಸರ್ವಜ್ಞ ಕ್ಷೇತ್ರವನ್ನು ಭಾಗಶ: ಅಥವಾ ಸಂಪೂರ್ಣವಾಗಿ ಪ್ರತಿನಿಧಿಸುವ ಲೋಕಸಭಾ ಮತ್ತು ವಿಧಾನಸಭೆಯ ಸದಸ್ಯರು ಹಾಗೂ ಸರ್ವಜ್ಞ ಕ್ಷೇತ್ರದಲ್ಲಿ ಮತದಾರರಾಗಿ ನೋಂದಾಯಿತರಾದ ರಾಜ್ಯಸಭೆಯ ಮತ್ತು ವಿಧಾನ ಪರಿಷತ್ತಿನ ಸದಸ್ಯರು. | - ಸದಸ್ಯರು |
| (ಐ) ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ. | - ಪದನಿಮಿತ್ತ ಸದಸ್ಯರು |

| | |
|---|---|
| (ಜೆ) ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ, ಕಂದಾಯ ಇಲಾಖೆ | - ಪದನಿಮಿತ್ತ ಸದಸ್ಯರು |
| (ಕೆ) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಅಥವಾ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ, ಹಣಕಾಸು ಇಲಾಖೆ | - ಪದನಿಮಿತ್ತ ಸದಸ್ಯರು |
| (ಎಲ್) ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ. | - ಪದನಿಮಿತ್ತ ಸದಸ್ಯರು |
| (ಎಂ) ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ ಲೋಕೋಪಯೋಗಿ ಇಲಾಖೆ | - ಪದನಿಮಿತ್ತ ಸದಸ್ಯರು |
| (ಎನ್) ಬೆಳಗಾವಿ ಪ್ರದೇಶದ ಪ್ರಾದೇಶಿಕ ಆಯುಕ್ತರು | - ಪದನಿಮಿತ್ತ ಸದಸ್ಯರು |
| (ಒ) ಹಾವೇರಿ ಜಿಲ್ಲೆಯ ಜಿಲ್ಲಾಧಿಕಾರಿ | - ಪದನಿಮಿತ್ತ ಸದಸ್ಯರು |
| (ಪಿ) ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ವಸ್ತು ಸಂಗ್ರಹಾಲಯಗಳ ಇಲಾಖೆ | - ಪದನಿಮಿತ್ತ ಸದಸ್ಯರು |
| (ಕ್ಯೂ) ಜಂಟಿ ನಿರ್ದೇಶಕರು, ಕರ್ನಾಟಕ ಭೂಸೇನಾ ನಿಗಮ. | - ಪದನಿಮಿತ್ತ ಸದಸ್ಯರು |
| (ಆರ್) ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಹಾವೇರಿ | - ಪದನಿಮಿತ್ತ ಸದಸ್ಯರು |
| (ಎಸ್) ಕಾರ್ಯನಿರ್ವಾಹಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಹಾವೇರಿ. | - ಪದನಿಮಿತ್ತ ಸದಸ್ಯರು |
| (ಟಿ) ಅಬಲೂರು ಮತ್ತು ಮಾಸೂರು ಗ್ರಾಮಪಂಚಾಯತಿಯ ಅಧ್ಯಕ್ಷರು. | - ಪದನಿಮಿತ್ತ ಸದಸ್ಯರು |
| (ಯು) ರಾಜ್ಯ ಸರ್ಕಾರವು ನಾಮನಿರ್ದೇಶಿಸಿದ ಮೂವರನ್ನು ಮೀರದ ಸರ್ಕಾರೇತರ ಸದಸ್ಯರು. | - ಸರ್ಕಾರೇತರ ಸದಸ್ಯರು |
| (ವಿ) ರಾಜ್ಯ ಸರ್ಕಾರವು ನಾಮನಿರ್ದೇಶಿಸಬೇಕಾದ. ಸರ್ವಜ್ಞನ ಇತಿಹಾಸ ಮತ್ತು ಪರಂಪರೆಯ ಕುರಿತು ತಜ್ಞರಾಗಿರುವ ಐವರನ್ನು ಮೀರದ ವ್ಯಕ್ತಿಗಳು. | - ಸರ್ಕಾರೇತರ ಸದಸ್ಯರು |
| (ಡಬ್ಲ್ಯೂ) ಪ್ರಾಧಿಕಾರದ ಆಯುಕ್ತರು | - ಸದಸ್ಯ ಕಾರ್ಯದರ್ಶಿ |

4. **ಪದಾವಧಿ ಮತ್ತು ಸೇವಾ ಷರತ್ತುಗಳು**.- (1) ರಾಜ್ಯ ಸರ್ಕಾರದ ಇಚ್ಛೆಗೊಳಪಟ್ಟು, ರಾಜ್ಯ ಸರ್ಕಾರವು ನಾಮನಿರ್ದೇಶಿಸಿದ ಸರ್ಕಾರೇತರ ಸದಸ್ಯರು ಮೂರು ವರ್ಷಗಳ ಅವಧಿಗೆ ಪದಧಾರಣ ಮಾಡತಕ್ಕದ್ದು.

(ಎ) "ಸೌಕರ್ಯ" ಎಂಬುದರಲ್ಲಿ ರಸ್ತೆಗಳು, ಬೀದಿಗಳು, ಸುರಂಗ ಮಾರ್ಗಗಳು, ದೀಪವ್ಯವಸ್ಥೆ, ಚರಂಡಿ ವ್ಯವಸ್ಥೆ, ನಿರ್ಮಲೀಕರಣ, ವಿದ್ಯುಚ್ಛಕ್ತಿ ಮತ್ತು ನೀರು ಸರಬರಾಜು ಅಥವಾ ಇತರ ಅನುಕೂಲಗಳು; ಲೋಕೋಪಯೋಗಿ ಕಾಮಗಾರಿಗಳು, ಮಾರುಕಟ್ಟೆ ಸ್ಥಳಗಳು, ಅಂಚೆ ಕಚೇರಿ, ಬ್ಯಾಂಕು, ಆಸ್ಪತ್ರೆ, ಚಿಕಿತ್ಸಾಲಯ, ಪೋಲೀಸು ಠಾಣೆ, ನ್ಯಾಯಬೆಲೆ ಅಂಗಡಿ, ಹಾಲಿನ ಕೇಂದ್ರ, ಗ್ರಂಥಾಲಯ, ಮನೋರಂಜನಾ ಕೇಂದ್ರಗಳು, ಪ್ರಾಧಿಕಾರಿಯು ಪ್ರಾಧಿಕೃತಗೊಳಿಸಿದ ಜನೋಪಯೋಗಿ ಸೇವೆಯ ಯಾವುವೇ ಸೇವಾ ಕೇಂದ್ರಗಳು; ಅಥವಾ ಇತರ ಸೌಲಭ್ಯಗಳು; ಮತ್ತು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಇತರ ಸೌಕರ್ಯಗಳು ಒಳಗೊಳ್ಳುತ್ತವೆ;

(ಬಿ) "ಪ್ರಾಧಿಕಾರ" ಎಂದರೆ, 3ನೇ ಪ್ರಕರಣದ ಅಡಿಯಲ್ಲಿ ರಚಿಸಿದ ಶ್ರೀ ಮಲೈ ಮಹದೇಶ್ವರಸ್ವಾಮಿ ಕ್ಷೇತ್ರ ಅಭಿವೃದ್ಧಿ ಪ್ರಾಧಿಕಾರ;

(ಸಿ) "ಅಧ್ಯಕ್ಷ" ಎಂದರೆ, ಪ್ರಾಧಿಕಾರದ ಅಧ್ಯಕ್ಷ;

(ಡಿ) "ನಿಧಿ" ಎಂದರೆ, ಪ್ರಾಧಿಕಾರದ ನಿಧಿ;

(ಇ) "ಕಾರ್ಯದರ್ಶಿ" ಎಂದರೆ, 10ನೇ ಪ್ರಕರಣದ ಅಡಿಯಲ್ಲಿ ನೇಮಕ ಮಾಡಲಾದ ಪ್ರಾಧಿಕಾರದ ಕಾರ್ಯದರ್ಶಿ;

(ಎಫ್) "ಶ್ರೀ ಮಲೈ ಮಹದೇಶ್ವರಸ್ವಾಮಿ ಕ್ಷೇತ್ರ" ಎಂದರೆ, ಅದು ಶ್ರೀ ಮಲೈ ಮಹದೇಶ್ವರಸ್ವಾಮಿ ದೇವಸ್ಥಾನ ಮತ್ತು ಚಾಮರಾಜನಗರ ಜಿಲ್ಲೆಯಲ್ಲಿನ ಕೊಳ್ಳೆಗಾಲ ತಾಲ್ಲೂಕಿನ ಮಲೈ ಮಹದೇಶ್ವರ ಬೆಟ್ಟಗಳಲ್ಲಿ ಅದಕ್ಕೆ ಸೇರಿಕೊಂಡ ಎಲ್ಲಾ ಅಧೀನ ದೇವಸ್ಥಾನಗಳು, ಮಲೈ ಮಹದೇಶ್ವರ ಬೆಟ್ಟಗಳ ಇಡೀ ಪ್ರದೇಶ ಮತ್ತು ಶ್ರೀ ಮಲೈ ಮಹದೇಶ್ವರಸ್ವಾಮಿ ಕ್ಷೇತ್ರದ ಅಭಿವೃದ್ಧಿಗಾಗಿ ಸರ್ಕಾರವು ಕಾಲಕಾಲಕ್ಕೆ ಆರ್ಜಿಸಬಹುದಾದ ಭೂಪ್ರದೇಶ ಹಾಗೂ ರಾಜ್ಯಸರ್ಕಾರವು ಅಧಿಸೂಚನೆಯ ಮೂಲಕ ಘೋಷಿಸಬಹುದಾದ ಅಂಥ ಇತರೆ ಪ್ರದೇಶಗಳು ಇವುಗಳನ್ನು ಒಳಗೊಳ್ಳುತ್ತದೆ;

(ಜಿ) "ಸದಸ್ಯ" ಎಂದರೆ, ಪ್ರಾಧಿಕಾರದ ಸದಸ್ಯ;

(ಎಚ್) "ವಿನಿಯಮಗಳು" ಎಂದರೆ, 38ನೇ ಪ್ರಕರಣದ ಅಡಿಯಲ್ಲಿ ರಚಿಸಿದ ಪ್ರಾಧಿಕಾರದ ವಿನಿಯಮಗಳು;

**ಅಧ್ಯಾಯ II**

**ಶ್ರೀ ಮಲೈ ಮಹದೇಶ್ವರ ಸ್ವಾಮಿ ಕ್ಷೇತ್ರ ಅಭಿವೃದ್ಧಿ ಪ್ರಾಧಿಕಾರದ ರಚನೆ ಮತ್ತು ಅದರ ಉದ್ಯೋಗಿಗಳು**

**3. ಪ್ರಾಧಿಕಾರದ ರಚನೆ.-** (1) ಈ ಅಧಿನಿಯಮದ ಪ್ರಾರಂಭದ ತರುವಾಯ ಆದಷ್ಟು ಬೇಗನೆ, ಈ ಅಧಿನಿಯಮದ ಉದ್ದೇಶಗಳಿಗಾಗಿ, ಶ್ರೀ ಮಲೈ ಮಹದೇಶ್ವರಸ್ವಾಮಿ ಕ್ಷೇತ್ರ ಅಭಿವೃದ್ಧಿ ಪ್ರಾಧಿಕಾರ ಎಂದು ಕರೆಯಲಾಗುವ ಒಂದು ಪ್ರಾಧಿಕಾರವನ್ನು ಸ್ಥಾಪಿಸತಕ್ಕದ್ದು.

(2) ಪ್ರಾಧಿಕಾರವು ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲ್ಲೂಕಿನ ಮಲೈ ಮಹದೇಶ್ವರ ಬೆಟ್ಟಗಳಲ್ಲಿ ತನ್ನ ಕೇಂದ್ರ ಕಾರ್ಯಸ್ಥಾನವನ್ನು ಹೊಂದಿರತಕ್ಕದ್ದು.

(3) ಪ್ರಾಧಿಕಾರವು, ಶಾಶ್ವತ ಉತ್ತರಾಧಿಕಾರ ಮತ್ತು ಸಾಮಾನ್ಯ ಮೊಹರನ್ನು ಹೊಂದಿರುವ, ಚರ ಮತ್ತು ಸ್ಥಿರ ಸ್ವತ್ತುಗಳೆರಡನ್ನು ಆರ್ಜಿಸುವ, ಧಾರಣ ಮಾಡುವ ಹಾಗೂ ವಿಲೆ ಮಾಡುವ ಮತ್ತು ಕರಾರು ಮಾಡಿಕೊಳ್ಳುವ ಅಧಿಕಾರವನ್ನು ಹೊಂದಿರುವ, ಮೇಲೆ ಹೇಳಿದ ಹೆಸರಿನ ಒಂದು ನಿಗಮಿತ ನಿಕಾಯವಾಗಿರತಕ್ಕದ್ದು ಮತ್ತು ಸದರಿ ಹೆಸರಿನಿಂದ ದಾವೆ ಹೂಡತಕ್ಕದ್ದು ಮತ್ತು ದಾವೆಗೆ ಗುರಿಯಾಗತಕ್ಕದ್ದು.

(4) ಪ್ರಾಧಿಕಾರವು ಈ ಮುಂದಿನ ಸದಸ್ಯರನ್ನು ಒಳಗೊಂಡಿರತಕ್ಕದ್ದು, ಎಂದರೆ:-

(ಎ) ಮುಖ್ಯಮಂತ್ರಿಗಳು- ಇವರು ಪ್ರಾಧಿಕಾರದ ಪದನಿಮಿತ್ತ ಅಧ್ಯಕ್ಷರಾಗಿರತಕ್ಕದ್ದು;

(ಬಿ) ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಇಲಾಖೆಯ ಪ್ರಭಾರದಲ್ಲಿರುವ ಸಚಿವರು, ಇವರು ಪ್ರಾಧಿಕಾರದ ಉಪಾಧ್ಯಕ್ಷರಾಗಿರತಕ್ಕದ್ದು;

(ಸಿ) ಜಿಲ್ಲೆಯ ಜಿಲ್ಲಾ ಉಸ್ತುವಾರಿ ಸಚಿವರು;

(ಡಿ) ಶ್ರೀ ಸಾಲೂರು ಮಠದ ಪೀಠಾಧಿಪತಿಗಳು, ಮಲೈ ಮಹದೇಶ್ವರ ಬೆಟ್ಟಗಳು;

(ಇ) ಶ್ರೀ ಮಲೈ ಮಹದೇಶ್ವರಸ್ವಾಮಿ ಕ್ಷೇತ್ರವನ್ನು ಭಾಗಶಃ ಅಥವಾ ಪೂರ್ಣವಾಗಿ ಪ್ರತಿನಿಧಿಸುವ ಹಾಗೂ ಅದರ ಎಲ್ಲೆಗಳೊಳಗೆ ತಮ್ಮ ಚುನಾವಣಾ ಕ್ಷೇತ್ರವನ್ನು ಹೊಂದಿರುವ ಸಂಸತ್ ಸದಸ್ಯರು ಮತ್ತು ರಾಜ್ಯ ವಿಧಾನಮಂಡಲದ ಸದಸ್ಯರು;

(ಎಫ್) ರಾಜ್ಯ ಸರ್ಕಾರವು ನಾಮನಿರ್ದೇಶನ ಮಾಡಿದ ಅತಿಗಣ್ಯ ವ್ಯಕ್ತಿಗಳ ಪೈಕಿ ಇಬ್ಬರನ್ನು ಮೀರದ ಸದಸ್ಯರು, ಅವರಲ್ಲಿ ಒಬ್ಬರು ಮುಖ್ಯ ಅಭಿಯಂತರರು (ಸಿವಿಲ್) ಪದವನ್ನು ಹೊಂದಿರತಕ್ಕದ್ದು;

(ಜಿ) ಸಂಪರ್ಕ ಮತ್ತು ಕಟ್ಟಡದ ಮುಖ್ಯ ಅಭಿಯಂತರರು, ಲೋಕೋಪಯೋಗಿ ಇಲಾಖೆ;

(ಎಚ್) ಸರ್ಕಾರದ ಕಾರ್ಯದರ್ಶಿ, ಆರ್ಥಿಕ ಇಲಾಖೆ;

(ಐ) ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳು, ಕಂದಾಯ ಇಲಾಖೆ, ಇದರ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ;

(ಜೆ) ಕಾರ್ಯದರ್ಶಿಯು ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳು, ಬೆಂಗಳೂರು;

(ಕೆ) ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆ;

(ಎಲ್) ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿ, ಜಿಲ್ಲಾ ಪಂಚಾಯತಿ, ಚಾಮರಾಜನಗರ ಜಿಲ್ಲೆ;

(ಎಂ) ನಿರ್ದೇಶಕರು, ಪುರಾತತ್ವ ಶಾಸ್ತ್ರ ಮತ್ತು ವಸ್ತು ಸಂಗ್ರಹಾಲಗಳ ಇಲಾಖೆ, ಮೈಸೂರು;

(ಎನ್) ಪ್ರಾಧಿಕಾರದ ಕಾರ್ಯದರ್ಶಿ, ಇವರು ಸದಸ್ಯ-ಕಾರ್ಯದರ್ಶಿಯಾಗಿರತಕ್ಕದ್ದು.

**4. ಪದಾವಧಿ ಮತ್ತು ಸೇವಾ ಷರತ್ತುಗಳು.**- (1) ರಾಜ್ಯ ಸರ್ಕಾರದ ಇಚ್ಛೆಗೊಳಪಟ್ಟು, ರಾಜ್ಯ ಸರ್ಕಾರವು ನಾಮನಿರ್ದೇಶಿಸಿದ ಸರ್ಕಾರೇತರ ಸದಸ್ಯರು ಮೂರು ವರ್ಷಗಳ ಅವಧಿಗೆ ಪದಧಾರಣ ಮಾಡತಕ್ಕದ್ದು:

ಪರಂತು, ಶ್ರೀ ಸಾಲೂರು ಮಠದ ಪೀಠಾಧಿಪತಿಗಳು ಶಾಶ್ವತ ಸದಸ್ಯರಾಗಿರತಕ್ಕದ್ದು.

(2) ಯಾವೊಬ್ಬ ಸರ್ಕಾರೇತರ ಸದಸ್ಯನು ತನ್ನ ಸಹಿಯೊಂದಿಗೆ ರಾಜ್ಯ ಸರ್ಕಾರಕ್ಕೆ ಬರೆಯುವ ಮೂಲಕ ತನ್ನ ಪದಕ್ಕೆ ರಾಜೀನಾಮೆ ನೀಡಬಹುದು ಆದರೆ ತನ್ನ ರಾಜೀನಾಮೆಯು ಅಂಗೀಕಾರವಾಗುವವರೆಗೂ ಪದದಲ್ಲಿ ಮುಂದುವರೆಯತಕ್ಕದ್ದು.

(3) ನಿಯಮಿಸಬಹುದಾದ ಅಂಥ ಭತ್ಯೆಗಳನ್ನು ಸರ್ಕಾರೇತರ ಸದಸ್ಯರು ಪಡೆಯತಕ್ಕದ್ದು.

**5. ಸದಸ್ಯತ್ವಕ್ಕೆ ಅನರ್ಹತೆಗಳು.**- ಒಬ್ಬ ವ್ಯಕ್ತಿಯು,-

(ಎ) ರಾಜ್ಯ ಸರ್ಕಾರದ ಅಭಿಪ್ರಾಯದಲ್ಲಿ ನೈತಿಕ ಅಧಃಪತನವನ್ನೊಳಗೊಳ್ಳುವ ಒಂದು ಅಪರಾಧಕ್ಕಾಗಿ ಅಪರಾಧಿ ಎಂದು ನಿರ್ಣೀತನಾಗಿದ್ದು ಕಾರಾವಾಸದ ಶಿಕ್ಷೆಗೆ ಗುರಿಯಾಗಿದ್ದರೆ; ಅಥವಾ

(ಬಿ) ಅಸ್ವಸ್ಥ ಚಿತ್ತದವನಾಗಿದ್ದರೆ ಮತ್ತು ಹಾಗೆಂದು ಸಕ್ಷಮ ನ್ಯಾಯಾಲಯದಿಂದ ಘೋಷಿತನಾಗಿದ್ದರೆ; ಅಥವಾ

(ಸಿ) ಅವಿಮುಕ್ತ ದಿವಾಳಿಯಾಗಿದ್ದರೆ; ಅಥವಾ

(ಡಿ) ಕೇಂದ್ರ ಸರ್ಕಾರದ ಅಥವಾ ರಾಜ್ಯ ಸರ್ಕಾರದ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರವು ಒಡೆತನ ಹೊಂದಿರುವ ಅಥವಾ ನಿಯಂತ್ರಣ ಹೊಂದಿರುವ ಒಂದು ನಿಕಾಯ ಅಥವಾ ನಿಗಮದ ಸೇವೆಯಿಂದ ತೆಗೆದು ಹಾಕಲಾದ ವ್ಯಕ್ತಿಯಾಗಿದ್ದರೆ ಅಥವಾ ವಜಾ ಮಾಡಲಾದ ವ್ಯಕ್ತಿಯಾಗಿದ್ದರೆ; ಅಥವಾ

(ಇ) ಪ್ರಾಧಿಕಾರದ ಆದೇಶದಿಂದ ಮಾಡಲಾದ ಯಾವುದೇ ಕಾಮಗಾರಿಯಲ್ಲಿ ಅಥವಾ ಪ್ರಾಧಿಕಾರದೊಡನೆ ಅಥವಾ ಅದರ ಅಡಿಯಲ್ಲಿ ಅಥವಾ ಅದರ ಮೂಲಕ ಅಥವಾ ಅದರ ಪರವಾಗಿ ಮಾಡಿಕೊಂಡ ಯಾವುದೇ ಕರಾರು ಅಥವಾ ನಿಯೋಜನೆಯಲ್ಲಿ ಸ್ವಯಂ ತಾನೇ ಅಥವಾ ಒಬ್ಬ ಪಾಲುದಾರನ ಅಥವಾ ಏಜೆಂಟನ ಮೂಲಕ ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಯಾವುದೇ ಷೇರನ್ನು ಅಥವಾ ಹಿತಾಸಕ್ತಿಯನ್ನು ಹೊಂದಿದ್ದರೆ; ಅಥವಾ

(ಎಫ್) ಪ್ರಾಧಿಕಾರದ ಪರವಾಗಿ, ವೇತನ ಪಡೆಯುವ ನ್ಯಾಯವಾದಿಯಾಗಿ ನಿಯೋಜಿತನಾಗಿದ್ದರೆ ಅಥವಾ ಪ್ರಾಧಿಕಾರದ ವಿರುದ್ಧವಾಗಿ ನ್ಯಾಯವಾದಿಯ ನಿಯೋಜನೆಯನ್ನು ಒಪ್ಪಿಕೊಂಡಿದ್ದರೆ,

-ಅವನು ಸದಸ್ಯನಾಗಿ ನೇಮಕ ಹೊಂದಲು ಅಥವಾ ಸದಸ್ಯನಾಗಿರಲು ಅನರ್ಹನಾಗತಕ್ಕದ್ದು:

ಪರಂತು, ಒಬ್ಬ ವ್ಯಕ್ತಿಯು, ಪ್ರಾಧಿಕಾರದ ವ್ಯವಹಾರಗಳಿಗೆ ಸಂಬಂಧಪಟ್ಟ ಯಾವುದೇ ಜಾಹೀರಾತನ್ನು ಪ್ರಕಟಿಸಿರುವ ಯಾವುದೇ ವೃತ್ತ ಪತ್ರಿಕೆಯಲ್ಲಿ ಷೇರು ಅಥವಾ ಹಿತಾಸಕ್ತಿಯನ್ನು ಹೊಂದಿದ್ದಾನೆಂಬ ಕಾರಣ ಮಾತ್ರದಿಂದಲೇ (1)ನೇ ಉಪಪ್ರಕರಣದ (ಇ) ಖಂಡದ ಅಡಿಯಲ್ಲಿ ಅನರ್ಹನಾಗತಕ್ಕದ್ದಲ್ಲ ಅಥವಾ ಸದರಿ ಖಂಡದ ಅರ್ಥ ವ್ಯಾಪ್ತಿಯಲ್ಲಿ ಯಾವುದೇ ಕರಾರು ಅಥವಾ ನಿಯೋಜನೆಯಲ್ಲಿ ಯಾವುದೇ ಷೇರು ಅಥವಾ ಹಿತಾಸಕ್ತಿಯನ್ನು ಹೊಂದಿದ್ದಾನೆಂದು ಭಾವಿಸತಕ್ಕದ್ದಲ್ಲ.

**6. ಸದಸ್ಯನನ್ನು ತೆಗೆದು ಹಾಕುವುದು.**- (1) ರಾಜ್ಯ ಸರ್ಕಾರವು ಸದಸ್ಯರೊಬ್ಬರನ್ನು, ಆತನು,-

(ಎ) 5ನೇ ಪ್ರಕರಣದಲ್ಲಿ ಹೇಳಲಾದ ಅನರ್ಹತೆಗಳಲ್ಲಿ ಯಾವುದೇ ಅನರ್ಹತೆಗೆ ಒಳಪಟ್ಟರೆ:

ಪರಂತು ಯಾವ ಸದಸ್ಯರನ್ನೂ, ಆತ ಆ ಪ್ರಕರಣದ (1)ನೇ ಉಪ ಪ್ರಕರಣದ (ಇ) ಖಂಡದಲ್ಲಿ ಹೇಳಲಾದ ಅನರ್ಹತೆಗೆ ಒಳಗಾಗಿದ್ದಾನೆಂಬ ಕಾರಣದ ಮೇಲೆ, ಸದರಿ ಪ್ರಸ್ತಾವದ ವಿರುದ್ಧ ತನ್ನ ಮನವಿಯನ್ನು ಸಲ್ಲಿಸಲು ಅವನಿಗೆ ಒಂದು ಅವಕಾಶವನ್ನು ಕೊಟ್ಟ ಹೊರತು, ತೆಗೆದು ಹಾಕತಕ್ಕದ್ದಲ್ಲ; ಅಥವಾ

(ಬಿ) ಕಾರ್ಯ ನಿರ್ವಹಿಸಲು ನಿರಾಕರಿಸಿದರೆ ಅಥವಾ ಕಾರ್ಯವನ್ನು ನಿರ್ವಹಿಸಲು ಅಸಮರ್ಥನಾದರೆ; ಅಥವಾ

(ಸಿ) ಗೈರು ಹಾಜರಾಗಲು ಪ್ರಾಧಿಕಾರದ ಅನುಮತಿಯನ್ನು ಪಡೆಯದೆ ಪ್ರಾಧಿಕಾರದ ಮೂರು ನಿರಂತರ ಸಭೆಗಳಿಗೆ ಗೈರುಹಾಜರಾದರೆ:

ಪರಂತು, ಈ ಖಂಡವು ಪದನಿಮಿತ್ತ ಸದಸ್ಯರಿಗೆ ಅನ್ವಯವಾಗತಕ್ಕದ್ದಲ್ಲ; ಅಥವಾ

(ಡಿ) ಆತನನ್ನು ಆ ಪದದಲ್ಲಿ ಮುಂದುವರಿಸಿದರೆ, ಸಾರ್ವಜನಿಕ ಹಿತಾಸಕ್ತಿಗೆ ಬಾಧಕ ಉಂಟಾಗುವಂತೆ ತನ್ನ ಸ್ಥಾನವನ್ನು ಆತ ದುರುಪಯೋಗಪಡಿಸಿಕೊಳ್ಳುವನೆಂದು ರಾಜ್ಯ ಸರ್ಕಾರವು ಅಭಿಪ್ರಾಯಪಟ್ಟರೆ,

- ಆತನನ್ನು ಸದಸ್ಯ ಸ್ಥಾನದಿಂದ ತೆಗೆದುಹಾಕತಕ್ಕದ್ದು:

ಪರಂತು, ಯಾವ ಸದಸ್ಯನನ್ನೂ ಆತನಿಗೆ ಸದರಿ ಪ್ರಸ್ತಾವದ ವಿರುದ್ಧ ತನ್ನ ಮನವಿಯನ್ನು ಹೇಳಿಕೊಳ್ಳಲು ಒಂದು ಅವಕಾಶವನ್ನು ಕೊಟ್ಟ ಹೊರತು, ಈ ಖಂಡದ ಅಡಿಯಲ್ಲಿ ತೆಗೆದು ಹಾಕತಕ್ಕದ್ದಲ್ಲ.